# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 108

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ

ಉತ್ತರಿಸಬೇಕಾದ ದಿನಾಂಕ: : 15.07.2019

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪ್ರಧಾನಮಂತ್ರಿ ಫಸಲ್ ಭೀಮಾ ಯೋಜನೆಯಡಿಯಲ್ಲಿ ಖಾಸಗಿ ವಿಮಾ ಸಂಸ್ಥೆಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ನಿಯಮಗಳನ್ನು ರೂಪಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಧಾನ ಮಂತ್ರಿ ಫಸಲ್ ಭೀಮಾ ಯೋಜನೆಯು ಕೇಂದ್ರ ಸರ್ಕಾರದ ಯೋಜನೆಯಾಗಿದ್ದು, 2016-17ನೇ ಸಾಲಿನ ಮುಂಗಾರು ಹಂಗಾಮಿನಿಂದ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ರಾಜ್ಯದಲ್ಲಿ ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಭೀಮಾ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>ಈ ಯೋಜನೆಯ ಅನುಷ್ಠಾನಕ್ಕಾಗಿ, ಕೇಂದ್ರ ಸರ್ಕಾರದಿಂದ ಅನುಮತಿಸಲಾದ ವಿಮಾ ಸಂಸ್ಥೆಗಳಿಂದ ಟೆಂಡರ್ ಮುಖಾಂತರ ಬಿಡ್‌ಗಳನ್ನು ಆಹ್ವಾನಿಸಿ, ಅತಿ ಕಡಿಮೆ ದರದ ಬಿಡ್‌ಗಳನ್ನು ನಮೂದಿಸಿರುವ ವಿಮಾ ಸಂಸ್ಥೆಗಳನ್ನು ಆಯ್ಕೆ ಮಾಡಲಾಗುತ್ತದೆ. ಈ ರೀತಿ ಆಯ್ಕೆ ಮಾಡಿದ ಸಂಸ್ಥೆಗಳು ಕ್ಲಸ್ಟರ್‌ವಾರು ಬೆಳೆ ವಿಮೆ ಯೋಜನೆಯನ್ನು ಅನುಷ್ಠಾನಗೊಳಿಸುತ್ತವೆ.<br>ಒಟ್ಟು ವಿಮಾ ಕಂತಿನ ಮೊತ್ತದಲ್ಲಿ ರೈತರು ಪಾವತಿಸಿದ ವಂತಿಗೆಯ ಶೇ2.0ರಷ್ಟನ್ನು ಕಳೆದು ನಂತರ ಉಳಿಯುವ ವಂತಿಗೆಯನ್ನು ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಸಮನಾಗಿ ವಿಮಾ ಸಂಸ್ಥೆಗಳಿಗೆ ಭರಿಸುತ್ತವೆ. ಈ ರೀತಿ ಸಂಗ್ರಹಿಸಿದ ವಿಮಾ ಕಂತಿನ ಮೊತ್ತದಿಂದ ಬೆಳೆ ವಿಮಾ ನಷ್ಟ ಪರಿಹಾರವನ್ನು ಅನುಷ್ಠಾನ ವಿಮಾ ಸಂಸ್ಥೆಗಳು ಇತ್ಯರ್ಥಪಡಿಸುತ್ತವೆ.<br>ಒಂದು ವೇಳೆ ಒಟ್ಟು ವಿಮಾ ಕಂತಿನ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಎಷ್ಟೇ ಬೆಳೆ ನಷ್ಟ ವಿಮಾ ಪರಿಹಾರ ಬಂದರೂ ಅದನ್ನು ರೈತರಿಗೆ ಇತ್ಯರ್ಥಪಡಿಸುವ ಜವಾಬ್ದಾರಿ ಅನುಷ್ಠಾನ ವಿಮಾ ಸಂಸ್ಥೆಗಳದ್ದಾಗಿರುತ್ತದೆ. |
| ಆ | ಈ ತರಹದ ನಿಯಮಾವಳಿಗಳಿಂದ ರೈತರು ಪ್ರೀಮಿಯಂ ಹಣವನ್ನು ಪಾವತಿಸಿದ್ದರೂ ಅವರಿಗೆ ವಿಮೆ ಸೌಲಭ್ಯದ ಮೊತ್ತವು ಪಾವತಿಯಾಗದೆ | ಕರ್ನಾಟಕ ರೈತ ಸುರಕ್ಷಾ ಪ್ರಧಾನಮಂತ್ರಿ ಫಸಲ್ ಭೀಮಾ ಯೋಜನೆಯು ಕ್ಷೇತ್ರಾಧಾರಿತವಾಗಿದ್ದು ರೈತರು ಪ್ರೀಮಿಯಂ ಹಣವನ್ನು ಪಾವತಿಸಿದ್ದಾಗ್ಯೂ ಮಾರ್ಗಸೂಚಿಯಲ್ಲಿ ನಿಗದಿಪಡಿಸಿರುವ ವಿವಿಧ ಮಾನದಂಡಗಳನ್ವಯ ಬೆಳೆ ಕಟಾವು ಪ್ರಯೋಗಗಳಿಂದ ಬಂದಂತಹ ವಾಸ್ತವಿಕ ಇಳುವರಿಯು (Actual yield) ನಿಗದಿಪಡಿಸಿದ ಪ್ರಾರಂಭಿಕ ಇಳುವರಿಗಿಂತ (Historical yield) |

<table>
<tr><td></td><td>ಸಂಕಷ್ಟದಲ್ಲಿರುವುದು ನಿಜವೇ;</td><td>ಕಡಿಮೆ ಇದ್ದರೆ, ಇಳುವರಿಯ ಕೊರತೆಗೆ ಅನುಗುಣವಾಗಿ ಬೆಳೆ ವಿಮೆಗೆ ನೋಂದಾಯಿಸಿದ ರೈತರು ಬೆಳೆ ವಿಮಾ ನಷ್ಟ ಪರಿಹಾರ ಪಡೆಯಲು ಅರ್ಹರಿರುತ್ತಾರೆ.</td></tr>
<tr><td>ಇ</td><td>ಈ ವರ್ಷ ಮುಂಗಾರು ಹಂಗಾಮದಲ್ಲಿ ಖಾಸಗಿ ವಿಮಾ ಸಂಸ್ಥೆಗಳಿಗೆ ನಮ್ಮ ರಾಜ್ಯವೊಂದರಿಂದಲೇ 1,500 ಕೋಟಿ ರೂಪಾಯಿ ಲಾಭವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>2018ರ ಮುಂಗಾರು ಹಂಗಾಮಿನಲ್ಲಿ ಒಟ್ಟು ವಿಮಾ ಕಂತಿನ ಮೊತ್ತ ರೂ.113968.05 ಲಕ್ಷಗಳು ಪಾವತಿ ಅಗಿರುತ್ತದೆ. ಆದರೆ, ವಿಮಾ ಸಂಸ್ಥೆಗಳಿಂದ ಇತ್ಯರ್ಥಪಡಿಸಿರುವ ಬೆಳೆ ವಿಮಾ ನಷ್ಟ ಪರಿಹಾರ ಮೊತ್ತವು ರೂ.155759.59 ಲಕ್ಷಗಳಾಗಿದ್ದು, ಈ ವಿಮಾ ಪರಿಹಾರ ಮೊತ್ತವು ಒಟ್ಟು ವಿಮಾ ಕಂತಿನ ಮೊತ್ತಕ್ಕಿಂತ ರೂ.41791.54 ಲಕ್ಷಗಳು ಹೆಚ್ಚಾಗಿರುವುದರಿಂದ ವಿಮಾ ಸಂಸ್ಥೆಯು ಪಡೆಯಲಾದ ವಿಮಾ ಮೊತ್ತಕ್ಕಿಂತ ಹೆಚ್ಚಿನ ಪರಿಹಾರ ಪಾವತಿಸಬೇಕಾಗಿರುವುದು ಕಂಡು ಬಂದಿರುತ್ತದೆ. ವಿಮಾ ಸಂಸ್ಥೆವಾರು ಲೆಕ್ಕ ಹಾಕಿರುವ ವಿಮಾ ಪರಿಹಾರದ ವಿವರ ಈ ಕೆಳಕಂಡಂತಿದೆ.<br>
(ಲಕ್ಷ ರೂ.ಗಳಲ್ಲಿ)
<table>
<tr><th>ವಿಮೆ ಕಂಪನಿ ವಿವರ</th><th>ರೈತರ ವಿಮಾ ಕಂತು</th><th>ರಾಜ್ಯದ ಮತ್ತು ಕೇಂದ್ರದ ವಿಮ್ಮಾ ಕಂತು</th><th>ಒಟ್ಟು ವಿಮಾ ಕಂತು</th><th>ಲೆಕ್ಕ ಹಾಕಿರುವ ವಿಮಾ ಪರಿಹಾರ ಮೊತ್ತ</th></tr>
<tr><td>AIC</td><td>4749.55</td><td>29709.27</td><td>34458.82</td><td>4241.62</td></tr>
<tr><td>Future General</td><td>1085.33</td><td>8852.03</td><td>9937.36</td><td>2858.16</td></tr>
<tr><td>New India Assurance Co.Ltd</td><td>1914.06</td><td>16172.26</td><td>18086.32</td><td>26487.97</td></tr>
<tr><td>Reliance GIC</td><td>935.43</td><td>4769.65</td><td>5705.08</td><td>3655.45</td></tr>
<tr><td>United India Insurance Co.Ltd</td><td>4808.54</td><td>29201.10</td><td>34009.64</td><td>76832.13</td></tr>
<tr><td>USGIC</td><td>1765.57</td><td>10005.27</td><td>11770.84</td><td>3184.26</td></tr>
<tr><td>Total</td><td>15258.47</td><td>98709.58</td><td>113968.05</td><td>155759.59*</td></tr>
</table>
* ಇಲ್ಲಿಯವರೆಗೆ ಲೆಕ್ಕಚಾರ ಹಾಕಿರುವ ಬೆಳೆ ವಿಮಾ ನಷ್ಟ ಪರಿಹಾರದ ಮೊತ್ತ<br>
ಇದರಿಂದಾಗಿ, ವಿಮಾ ಸಂಸ್ಥೆಗೆ ಲಾಭವಾಗಿರುವುದಿಲ್ಲವೆಂಬ ಅಂಶವು ಕಂಡು ಬರುತ್ತದೆ.</td></tr>
</table>

| ಈ | ಕಳೆದ 3 ವರ್ಷದ ಅವಧಿಯಲ್ಲಿ ಫಸಲ್ ಭೀಮಾ ಯೋಜನೆ ಫಲಾನುಭವಿಗಳ ವರ್ಷವಾರು ವಿವರ ನೀಡುವುದು; | |
|---|---|---|

| ವರ್ಷ/ಹಂಗಾಮು | ಫಲಾನುಭವಿಗಳ ಸಂಖ್ಯೆ |
|---|---|
| 2016-17 ಮುಂಗಾರು | 637093 |
| 2016-17 ಹಿಂಗಾರು & ಬೇಸಿಗೆ | 843815 |
| 2017-18 ರ ಮುಂಗಾರು | 533842 |
| 2017-18 ರ ಹಿಂಗಾರು | 6936 |
| 2018-19 ರ ಹಿಂಗಾರು | 38345* |
| 2018-19 ರ ಹಿಂಗಾರು & ಬೇಸಿಗೆ | ಬೆಳೆ ಕಟಾವು ಫಲಿತಾಂಶದ ವರದಿ ಸ್ವೀಕೃತವಾದ ನಂತರ ಬೆಳೆ ವಿಮಾ ನಷ್ಟ ಪರಿಹಾರ ಇತ್ಯರ್ಥ ಪಡಿಸಲಾಗುವುದು. |

* ಬೆಳೆ ವಿಮಾ ನಷ್ಟ ಪರಿಹಾರ ಇತ್ಯರ್ಥವು ಪ್ರಗತಿಯಲ್ಲಿ ಇರುತ್ತದೆ.

| ಉ | ಈ ತರಹದ ಸಮಸ್ಯೆಗಳ ಪರಿಹಾರಕ್ಕೆ ಸರ್ಕಾರ ಏನು ಕ್ರಮ ಕೈಗೊಳ್ಳಲಿದೆ? | ಕರ್ನಾಟಕ ರೈತ ಸುರಕ್ಷಾ ಪ್ರಧಾನಮಂತ್ರಿ ಫಸಲ್ ಭೀಮಾ ಯೋಜನೆಗೆ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ರಾಜ್ಯದಲ್ಲಿ ಟೆಂಡರ್ ಮುಖಾಂತರ ಅನುಷ್ಠಾನ ವಿಮಾ ಸಂಸ್ಥೆಗಳನ್ನು ಆಯ್ಕೆ ಮಾಡಲಾಗುತ್ತಿದ್ದು, ಮಾರ್ಗಸೂಚಿಗಳನ್ವಯ ಅರ್ಹ ರೈತರಿಗೆ ವಿಮಾ ಸೌಲಭ್ಯ ದೊರಕುವಲ್ಲಿ ಯಾವುದೇ ಸಮಸ್ಯೆಗಳು ಉಂಟಾಗದಂತೆ ಕ್ರಮವಹಿಸಲಾಗುತ್ತಿದೆ. |
|---|---|---|

ಕೃಇ 27 ಕೃಉಇ 2019

(ಎನ್.ಹೆಚ್.ಶಿವಶಂಕರ ರೆಡ್ಡಿ)

ಕೃಷಿ ಸಚಿವರು